# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1212
ಸದಸ್ಯರ ಹೆಸರು : ಶ್ರೀ ಬಿ.ಕೆ.ಹರಿಪ್ರಸಾದ್ (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ: : 16.03.2021
ಉತ್ತರಿಸುವ ಮಾನ್ಯ ಸಚಿವರು : ಕೃಷಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ವಿಶ್ವಪ್ರಸಿದ್ಧ ಬ್ಯಾಡಗಿ ಮೆಣಸಿನಕಾಯಿಯಿಂದ ಮೆಣಸಿನ ಪುಡಿ ಸೇರಿದಂತೆ ವಿವಿಧ ಬಗೆಯ ಉತ್ಪನ್ನಗಳನ್ನು ತಯಾರಿಸುವ ಮಸಾಲೆ ಪಾರ್ಕ್ ಒಂದನ್ನು ಬ್ಯಾಡಗಿ ಅಥವಾ ಹಾವೇರಿಯಲ್ಲಿ ಸ್ಥಾಪಿಸಲು ಸರ್ಕಾರ ಕ್ರಮ ತೆಗೆದುಕೊಳ್ಳುವುದೇ; | ರಾಜ್ಯದಲ್ಲಿ ಹಾವೇರಿ ಜಿಲ್ಲೆಯ ಬ್ಯಾಡಗಿಯಲ್ಲಿ ಮಸಾಲೆ ಪಾರ್ಕ್ ನಿರ್ಮಾಣಕ್ಕೆ ಅವಶ್ಯವಿರುವ ಜಮೀನನ್ನು ಖರೀದಿಸಬೇಕಾಗಿದೆ ಹಾಗೂ ಆಸಕ್ತಿಯುಳ್ಳ ಅರ್ಹ ಪ್ರವರ್ತಕರನ್ನು ಆಯ್ಕೆ ಮಾಡಬೇಕಾಗಿದೆ. |
| (ಆ) | ಬ್ಯಾಡಗಿ ಮೆಣಸಿನಕಾಯಿಗೆ ಹೆಚ್ಚು ಬೇಡಿಕೆ ಇದ್ದು, ಖರೀದಿದಾರರು ಮೆಣಸಿನ ಕಾಯಿಯನ್ನು ಖರೀದಿಸಿದ ನಂತರ ಇಲ್ಲಿಯೇ ಪುಡಿ ಮಾಡಿಸಿಕೊಳ್ಳಲು ಅನುಕೂಲವಾಗುವಂತೆ ಮೆಣಸಿನಕಾಯಿ ಪುಡಿ ಮಾಡುವ (ಸುಮಾರು 100) ಘಟಕಗಳು ಬ್ಯಾಡಗಿಯಲ್ಲಿದ್ದು, ಇವುಗಳನ್ನೂ ಒಳಗೊಂಡಂತೆ ಆಧುನಿಕ ಮಾದರಿಯ ಮಸಾಲೆ ಪಾರ್ಕ್‌ವೊಂದನ್ನು ಸ್ಥಾಪಿಸಲು ಕ್ರಮ ಜರುಗಿಸಲಾಗುವುದೇ; | ರಾಜ್ಯದ ಹಾವೇರಿ ಜಿಲ್ಲೆಯ ಬ್ಯಾಡಗಿಯಲ್ಲಿ ಮಸಾಲೆ ಪಾರ್ಕ್ ಸ್ಥಾಪನೆಗಾಗಿ ದಿನಾಂಕ:18.2.2010 ರಂದು ರೂ.100 ಲಕ್ಷಗಳ ಅನುದಾನ ಬಿಡುಗಡೆಯಾಗಿದ್ದು, ಈ ಅನುದಾನವನ್ನು ದಿನಾಂಕ:02.03.2010 ರಂದು ಭೂಮಿಯನ್ನು ಖರೀದಿಸಿ, ಆಹಾರ ಕರ್ನಾಟಕ ನಿಯಮಿತಕ್ಕೆ ವರ್ಗಾಯಿಸಲು ಮೆ॥ ಕೆ.ಐ.ಎ.ಡಿ.ಬಿ ಸಂಸ್ಥೆಯನ್ನು ಕೋರಲಾಗಿದೆ.<br><br>ಮುಂದುವರೆದು, ಮೆ॥ಕೆ.ಐ.ಎ.ಡಿ.ಬಿ ಸಂಸ್ಥೆಯವರು ಹಾವೇರಿ ಜಿಲ್ಲೆಯಲ್ಲಿ ಉದ್ದೇಶಿತ ಪಾರ್ಕ್ ಸ್ಥಾಪನೆಯ ಪ್ರದೇಶದಲ್ಲಿ ಭೂಮಿಯ ಬೆಲೆ ವಿಪರೀತ ಹೆಚ್ಚಾಗಿರುವುದರಿಂದ ರೂ.100 ಲಕ್ಷಗಳ ಅನುದಾನದಲ್ಲಿ 100 ಎಕರೆಗಳಷ್ಟು ಜಮೀನನ್ನು ಸ್ವಾಧೀನ ಪಡಿಸಿಕೊಳ್ಳಲು ಸಾಧ್ಯವಿಲ್ಲವೆಂದು ಪತ್ರದ ಮೂಲಕ ತಿಳಿಸಿರುತ್ತಾರೆ. ಪ್ರಸ್ತುತ, ಉದ್ದೇಶಿತ ಪಾರ್ಕ್ ಸ್ಥಾಪನೆಯ ಪ್ರದೇಶದಲ್ಲಿ ಭೂಮಿಯ ಬೆಲೆ ಹೆಚ್ಚಾಗಿರುವುದರಿಂದ ಪಾರ್ಕ್ ಸ್ಥಾಪನೆಯ ಬಗ್ಗೆ ಮರುಪರಿಶೀಲಿಸಲು ಆಹಾರ ಕರ್ನಾಟಕ ನಿಯಮಿತದ ಆಡಳಿತ ಮಂಡಳಿಯ ವಿವಿಧ ಸಭೆಗಳಲ್ಲಿ ತೀರ್ಮಾನಿಸಲಾಗಿದೆ.<br><br>ಈ ಮಧ್ಯೆ ಸರ್ಕಾರದ ತೋಟಗಾರಿಕಾ ಇಲಾಖೆಯಿಂದ ಧಾರವಾಡದಲ್ಲಿ ಕರ್ನಾಟಕ ರಾಜ್ಯ ಸಾಂಬಾರು ಅಭಿವೃದ್ಧಿ ಮಂಡಳಿಯೊಂದನ್ನು ಸ್ಥಾಪಿಸಲಾಗಿರುತ್ತದೆ ಹಾಗೂ ಈ ಮಂಡಳಿಯ ಉದ್ದೇಶವೂ ಸಹ ಸಾಂಬಾರು ಪದಾರ್ಥಗಳಿಗೆ ಸಂಬಂಧಿಸಿದ ಅಭಿವೃದ್ಧಿ ಕಾರ್ಯಗಳನ್ನು ಹಮ್ಮಿಕೊಳ್ಳುವುದಾಗಿರುತ್ತದೆ. ಆದುದರಿಂದ, ಉದ್ದೇಶಿತ ಮಸಾಲೆ |

| | | |
|---|---|---|
| | | ಪಾರ್ಕ್‌ನ ಸ್ಥಾಪನೆಯನ್ನೂ ಸಹ ಸದರಿ ಸಾಂಬಾರು ಮಂಡಳಿಗೆ ವಹಿಸಲು ಆಹಾರ ಕರ್ನಾಟಕ ನಿಯಮಿತದ 49 ಹಾಗೂ 50ನೇ ಆಡಳಿತ ಮಂಡಳಿ ಸಭೆಯಲ್ಲಿ ತೀರ್ಮಾನಿಸಲಾಯಿತು. ಸದರಿ ತೀರ್ಮಾನವನ್ನು ಆಹಾರ ಕರ್ನಾಟಕ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರವರು ಕರ್ನಾಟಕ ರಾಜ್ಯ ಸಾಂಬಾರು ಅಭಿವೃದ್ಧಿ ಮಂಡಳಿಯ ಸಭೆಯಲ್ಲಿ ತಿಳಿಸಿರುತ್ತಾರೆ. ಅದರಂತೆ ಬ್ಯಾಡಗಿಯಲ್ಲಿ ಮಸಾಲೆ ಪಾರ್ಕ್ ನಿರ್ಮಾಣವನ್ನು ತೋಟಗಾರಿಕೆ ಇಲಾಖೆಯಡಿಯಲ್ಲಿ ಸ್ಥಾಪಿತವಾಗಿರುವ ಕರ್ನಾಟಕ ರಾಜ್ಯ ಸಾಂಬಾರು ಅಭಿವೃದ್ಧಿ ಮಂಡಳಿಯಿಂದ ಸ್ಥಾಪನೆ ಮಾಡಬಹುದಾಗಿರುತ್ತದೆ. |
| (ಇ) | ಇದರಿಂದ ಬ್ಯಾಡಗಿ ಮೆಣಸಿನಕಾಯಿ ಖರೀದಿ ಮಾಡುವ ಕಂಪನಿಗಳು ತಮ್ಮ ಮಸಾಲೆ ಉತ್ಪನ್ನಗಳನ್ನು ತಯಾರಿಸುವ ಘಟಕಗಳನ್ನು ಇಲ್ಲಿಯೇ ಸ್ಥಾಪಿಸುವುದರಿಂದ ಸ್ಥಳೀಯ ಜನರಿಗೆ ಉದ್ಯೋಗ ದೊರೆಯುವಂತಾಗುವುದಿಲ್ಲವೇ; ಸರ್ಕಾರ ಗಮನ ಹರಿಸುವುದೇ? | ಈ ಯೋಜನೆಗೆ ಅವಶ್ಯವಿರುವ ಜಮೀನನ್ನು ಖರೀದಿಸಿ ಪ್ರವರ್ತಕರನ್ನು ಆಯ್ಕೆ ಮಾಡಿ ಕರ್ನಾಟಕ ರಾಜ್ಯ ಸಾಂಬಾರು ಅಭಿವೃದ್ಧಿ ಮಂಡಳಿಯಿಂದ ಸ್ಥಾಪನೆ ಮಾಡಿ ಸ್ಥಳೀಯ ಜನರಿಗೆ ಉದ್ಯೋಗ ದೊರೆಕಿಸಿಕೊಡಬಹುದಾಗಿದೆ. |

**ಸಂಖ್ಯೆ: ಕೃಇ/40/ಕೃಕೈಲ/2021**

(ಬಿ.ಸಿ.ಪಾಟೀಲ್)
ಕೃಷಿ ಸಚಿವರು